# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 832

ವಿಧಾನ ಪರಿಷತ್ತು ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ : 09.03.2021

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಿ.ಪಿ.ಎಲ್ ಕಾರ್ಡ್‌ಗಳನ್ನು ಟಿ.ವಿ. ಬೈಕ್ ಮತ್ತು ಫ್ರಿಡ್ಜ್ ಹೊಂದಿರುವವರಿಗೆ ನೀಡುವುದಿಲ್ಲ ಎಂದು ಆಹಾರ ಮಂತ್ರಿಗಳು ಹೇಳಿಕೆ ನೀಡಿದ್ದು, ಈ ಬಗ್ಗೆ ಸರ್ಕಾರದ ನಿಲುವೇನು; | ಬಿಪಿಎಲ್ ಕುಟುಂಬಗಳನ್ನು ಗುರುತಿಸುವ ಸಲುವಾಗಿ ರಾಜ್ಯ ಸರ್ಕಾರವು 16-08-2016, 25-03-2017 ಹಾಗೂ 20-5-2017 ರ ಆದೇಶದಲ್ಲಿ ಬಿಪಿಎಲ್ ವರ್ಗಕ್ಕೆ ಒಳಪಡದ (Exclusion Criteria) 04 ಮಾನದಂಡಗಳನ್ನು ಗುರುತಿಸಿ ಆದೇಶಿಸಿರುತ್ತದೆ. ಕೆಳಗಿನ ಈ 04 ಮಾನದಂಡಗಳಿಗೆ ಒಳಪಡದವರು ಬಿಪಿಎಲ್ ಪಡಿತರ ಚೀಟಿ ಪಡೆಯಲು ಅರ್ಹರಿರುತ್ತಾರೆ.<br>1. ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ ಮಂಡಳಿಗಳು/ ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು. |
| | | 2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶದಲ್ಲಿ ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ವಾಣಿಜ್ಯ ವಾಹನವನ್ನು ಅಂದರೆ ಟ್ರ್ಯಾಕ್ಟರ್, ಮಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬಗಳನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನವನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4 . ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷಗಿಂತ ಹೆಚ್ಚಿಗೆ ಇರುವ ಕುಟುಂಬಗಳು.<br><br>ಮೇಲಿನ ಮಾನದಂಡಗಳನ್ನು ಹೊರತುಪಡಿಸಿ ಯಾವುದೇ ಮಾನದಂಡವನ್ನು ನಿಗಧಿಪಡಿಸಿರುವುದಿಲ್ಲ. |

| | | |
|---|---|---|
| ಆ | ಈ ಹೇಳಿಕೆ ವಿರುದ್ಧ ಸಾರ್ವಜನಿಕರು ಮತ್ತು ಶಾಸಕರು ಅಸಮಾಧಾನ ವ್ಯಕ್ತಪಡಿಸಿರುವ ಬಗ್ಗೆ ಸರ್ಕಾರದ ಅಂತಿಮ ನಿರ್ಧಾರವೇನು; ಈ ಬಗ್ಗೆ ಆದೇಶ ಹೊರಡಿಸಲಾಗುವುದೇ; | ಮೇಲೆ ತಿಳಿಸಿರುವ ಮಾನದಂಡಗಳಿಗೆ ಒಳಪಡದವರು ಬಿಪಿಎಲ್ ಕಾರ್ಡ್‌ನ್ನು ಪಡೆಯಲು ಅರ್ಹರಿರುತ್ತಾರೆ. |
| ಇ | ಬಿ.ಪಿ.ಎಲ್ ಕಾರ್ಡ್‌ಗಳನ್ನು ಹೊಂದಿರುವ ಅರ್ಹರಲ್ಲದವರಿಂದ ಕಾರ್ಡ್ ವಾಪಸ್ ಪಡೆಯುವ ನಿಟ್ಟಿನಲ್ಲಿ ಸರ್ಕಾರ ಕಠಿಣ ಕ್ರಮ ಕೈಗೊಂಡು ಅರ್ಹ ಕುಟುಂಬಗಳಿಗೆ ಮಾತ್ರ ನೀಡಲು ಕ್ರಮ ಕೈಗೊಳ್ಳಲಾವುದೇ? | ಮಾನದಂಡಗಳಿಗೆ ವಿರುದ್ಧವಾಗಿ ಆದ್ಯತಾ ಪಡಿತರ ಚೀಟಿ ಪಡೆದಿರುವವರನ್ನು ಪತ್ತೆ ಮಾಡಲು ಪ್ರತಿ ಪಡಿತರ ಚೀಟಿದಾರರಿಗೆ ಸಂಬಂಧಿಸಿದಂತೆ ಕೆಳಕಂಡ ಮಾಹಿತಿಗಳನ್ನು ಸಂಬಂಧಪಟ್ಟ ಇಲಾಖೆಗಳಿಂದ ಪಡೆದು ಆಹಾರ ಇಲಾಖೆಯ ದತ್ತಾಂಶದೊಂದಿಗೆ ಪರಿಶೀಲಿಸಿ ಕ್ರಮವಹಿಸಲಾಗುತ್ತಿದೆ.<br>• ಸರ್ಕಾರಿ ನೌಕರರು/ ಕಾರ್ಖಾನೆ ನೌಕರರು/ ನಿವೃತ್ತ ನೌಕರರು ಹೊಂದಿರುವ ಆದ್ಯತಾ ಪಡಿತರ ಚೀಟಿಗಳನ್ನು ಪರಿಶೀಲಿಸಲು ಖಜಾನೆ ಇಲಾಖೆಯಿಂದ ಹೆಚ್.ಆರ್.ಎಂ.ಎಸ್. ದತ್ತಾಂಶವನ್ನು ಪಡೆದು ತುಲನೆ ಮಾಡುವುದು.<br>• ಅರೆ ಸರ್ಕಾರಿ ನೌಕರರು ಹೊಂದಿರುವ ಆದ್ಯತಾ ಪಡಿತರ ಚೀಟಿಗಳನ್ನು ಪರಿಶೀಲಿಸಲು ಸಂಬಂಧಿಸಿದ ನಿಗಮ ಮಂಡಳಿ/ ಕಾರ್ಖಾನೆಗಳಿಂದ ಸಿಬ್ಬಂದಿಗಳ ವಿವರ ಪಡೆದು ತುಲನೆ ಮಾಡುವುದು.<br>• ಸಕ್ಕರೆ ಕಾರ್ಖಾನೆಗಳು ಹಾಗೂ ಇತರ ಖಾಸಗಿ ಕಾರ್ಖಾನೆಗಳಿಂದ ಕಾರ್ಖಾನೆ ನೌಕರರ ವಿವರವನ್ನು ಪಡೆದು ದತ್ತಾಂಶ ತುಲನೆ ಮಾಡುವುದು.<br>• ಆದಾಯ ತೆರಿಗೆ ಮತ್ತು ವೃತ್ತಿ ತೆರಿಗೆ ಇಲಾಖೆಗಳಿಂದ ತೆರಿಗೆ ಪಾವತಿದಾರರ ವಿವರಗಳನ್ನು ಪಡೆದು ತುಲನೆ ಮಾಡುವುದು.<br>• ನಗರಾಭಿವೃದ್ಧಿ ಮಂಡಳಿಗಳು/ ಪ್ರಾಧಿಕಾರಗಳು ಹಾಗೂ ನಗರಪಾಲಿಕೆ/ ನಗರಸಭೆ/ ಪುರಸಭೆ/ ಪಟ್ಟಣ ಪಂಚಾಯಿತಿಗಳಿಂದ ನಿವೇಶನ ಹಂಚಿಕೆ ಮತ್ತು ಆಸ್ತಿ ವಿವರಗಳನ್ನು ಪಡೆದು ತುಲನೆ ಮಾಡುವುದು.<br>• ಕಂದಾಯ ಇಲಾಖೆಯಿಂದ ಭೂಹಿಡುವಳಿ ಮಾಹಿತಿಗಳನ್ನು ಪಡೆದು ತುಲನೆ ಮಾಡುವುದು.<br>• ವಾಣಿಜ್ಯ ತೆರಿಗೆ ಇಲಾಖೆಯಿಂದ/ ಜಿ.ಎಸ್.ಟಿ ಅಧಿಕಾರಿಗಳಿಂದ ವ್ಯಾಪಾರಿ ಸಂಸ್ಥೆಗಳು/ವ್ಯಾಪಾರಸ್ಥರ ವಿವರಗಳನ್ನು ಪಡೆದು ತುಲನೆ ಮಾಡುವುದು<br>• ಕೃಷಿ ಮಾರುಕಟ್ಟೆ ಸಮಿತಿಗಳಿಂದ ನೋಂದಾಯಿತ ವ್ಯಾಪಾರಸ್ಥರ ವಿವರಗಳನ್ನು ಪಡೆದು ತುಲನೆ ಮಾಡುವುದು<br>• ಸಾರಿಗೆ ಇಲಾಖೆಯಿಂದ ಬಿಳಿ ಬಣ್ಣದ ಬೋರ್ಡಿನ ನಾಲ್ಕು ಚಕ್ರಗಳ ವಾಹನಗಳನ್ನು ಹೊಂದಿರುವವರ ದತ್ತಾಂಶ ಪಡೆದು ತುಲನೆ ಮಾಡುವುದು. |

ಆನಾಸ 83 ಡಿಆರ್‌ಎ 2021 (ಇ-ಆಫೀಸ್)

(ಉಮೇಶ ಕತ್ತಿ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು